ಬಿ.ಎಂ.ಶ್ರೀ . ಸ್ಮಾರಕ ಪ್ರತಿಷ್ಠಾನ (ರಿ).

ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ


**ಬಿ.ಎಂ.ಶ್ರೀ ಕಲಾಭವನ**
3ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು–560019
ದೂರವಾಣಿ: 26615877, 26676773.
**ಇಮೇಲ್: bmsritrust@gmail.com**


**34ನೇ ಸರ್ವಸದಸ್ಯರ ಸಭೆ**
**ದಿನಾಂಕ: 21–09–2014**
**ಭಾನುವಾರ**

**ಆಡಳಿತ ವರದಿ ಮತ್ತು ಲೆಕ್ಕಪತ್ರಗಳು**
**2013–2014**

**ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ (ರಿ).**
ಎಂ.ವಿ.ಸೀ. ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ, 3ನೇ ಮುಖ್ಯರಸ್ತೆ,
ನರಸಿಂಹರಾಜ ಕಾಲೋನಿ, ಬೆಂಗಳೂರು–560019

## 34ನೇ ಸರ್ವ ಸದಸ್ಯರ ಸಭೆಯ ತಿಳಿವಳಿಕೆ ಪತ್ರ

ಮಾನ್ಯರೇ,

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಮುವತ್ತನಾಲ್ಕನೆಯ ಸರ್ವಸದಸ್ಯರ ಸಭೆಯನ್ನು ದಿನಾಂಕ: 21–09–2014ನೇ ಭಾನುವಾರ ಬೆಳಗ್ಗೆ 10–30ಕ್ಕೆ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ. ನಾರಾಯಣ ಅವರ ಅಧ್ಯಕ್ಷತೆಯಲ್ಲಿ ಎಂ.ವಿ.ಸೀ. ಸಭಾಂಗಣದಲ್ಲಿ ನಡೆಯಲು ತೀರ್ಮಾನವಾಗಿದೆ. ತಾವು ದಯವಿಟ್ಟು ಸಕಾಲಕ್ಕೆ ಆಗಮಿಸಿ ಸಭೆಯ ಕಾರ್ಯಕಲಾಪಗಳನ್ನು ನಡೆಸಿಕೊಡಬೇಕಾಗಿ ವಿನಂತಿಸುತ್ತೇವೆ.

### ಕಾರ್ಯಸೂಚಿ

1. ಗತ ಮತ್ತು ಅಗಲಿದ ಸದಸ್ಯರಿಗೆ ಸಂತಾಪ ಸೂಚಿಸುವುದು.
2. ಸರ್ವ ಸದಸ್ಯರ ಸಭೆಯ ತಿಳಿವಳಿಕೆ ಪತ್ರವನ್ನು ಓದಿ ಸ್ಥಿರೀಕರಿಸುವುದು.
3. 2013–14ನೇ ಸಾಲಿನ ಆಡಳಿತ ವರದಿಯನ್ನು ಅಂಗೀಕರಿಸುವುದು.
4. 2013–14ನೇ, ಸಾಲಿನ ಲೆಕ್ಕಪರಿಶೋಧಕರು ನೀಡಿರುವ ಆಯ–ವ್ಯಯ ಲೆಕ್ಕ ತಃಖ್ತೆಗಳನ್ನು ಅನುಮೋದಿಸುವುದು.
5. 2014–15ನೇ ಸಾಲಿನ ಅಂದಾಜಿ ಆಯ–ವ್ಯಯ ಪಟ್ಟಿಯನ್ನು ಅನುಮೋದಿಸುವುದು.
6. 2014–15ನೇ ಸಾಲಿಗೆ ಲೆಕ್ಕ ಪರಿಶೋಧಕರ ನೇಮಕ ಮಾಡುವುದು.
7. ನಿಯಮಾನುಸಾರ ನಿವೃತ್ತರಾಗಲಿರುವ ಕಾರ್ಯಸಮಿತಿ ಸದಸ್ಯರ ಸ್ಥಾನಗಳಿಗೆ ಚುನಾವಣೆ ನಡೆಸುವುದು.
8. ಸದಸ್ಯರು ಕಳುಹಿಸಿರುವ ಸಲಹೆ ಸೂಚನೆಗಳ ಪರಿಶೀಲನೆ
9. ಇತರೆ ವಿಚಾರಗಳು (ಅಧ್ಯಕ್ಷರ ಒಪ್ಪಿಗೆಯಿಂದ).
10. ಅಧ್ಯಕ್ಷರ ಭಾಷಣ
11. ವಂದನಾರ್ಪಣೆ.

**ಕಾರ್ಯಸಮಿತಿಯ ಅಪ್ಪಣೆಯ ಮೇರೆಗೆ**

| | | |
|---|---|---|
| | ಸಹಿ | ಸಹಿ |
| **ದಿನಾಂಕ: 26–08–2014** | **ಪ್ರೊ.ಜಿ. ಅಬ್ದುಲ್ ಬಷೀರ್** | **ಬಿ.ಆರ್. ರವೀಂದ್ರನಾಥ್** |
| | ಗೌರವ ಕಾರ್ಯದರ್ಶಿ | ಗೌರವ ಕಾರ್ಯದರ್ಶಿ |

**ವಿಶೇಷ ಸೂಚನೆ**

1. ಸದಸ್ಯತ್ವ ಬಾಕಿ ಇರುವವರು ಅವಧಿ ಮುಗಿದ ಒಂದು ತಿಂಗಳೊಳಗೆ ಪಾವತಿ ಮಾಡಿರಬೇಕು.
2. ಅಗತ್ಯ ಸಂಖ್ಯೆ 'ಕೋರಂ' ಇಲ್ಲದಿದ್ದಲ್ಲಿ ಸಭೆಯು ಅರ್ಧ ಗಂಟೆ ನಂತರ ಆರಂಭವಾಗುತ್ತದೆ.
3. ಸದಸ್ಯರು ಕಳುಹಿಸುವ ಸಲಹೆ ಸೂಚನೆಗಳು ಒಂದು ವಾರಕ್ಕೆ ಮುಂಚೆ ತಲುಪಬೇಕು.
4. ಸಭೆಯ ನಂತರ ಭೋಜನವಿರುತ್ತದೆ.
5. ಆಯ–ವ್ಯಯ ಲೆಕ್ಕ ವಿವರ ಮತ್ತು ಆಡಳಿತ ವರದಿಯ ಪ್ರತಿಗಳನ್ನು ಪ್ರತಿಷ್ಠಾನದ ಕಛೇರಿ ಸಮಯದಲ್ಲಿ ಬೆಳಗ್ಗೆ 10–30 ರಿಂದ 1–30, ಸಂಜೆ 4–30 ರಿಂದ 7–30ರೊಳಗಾಗಿ ಪಡೆಯಬಹುದು ಅಥವಾ ಅಲ್ಲೇ ಪರಿಶೀಲಿಸಬಹುದು.

## ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
## ಎಂ.ವಿ.ಸೀ. ಸಂಶೋಧನ ಕೇಂದ್ರ
## 01–04–2013 ರಿಂದ 31–03–2014ರ ವರೆಗೆ ಆಡಳಿತ ವರದಿ

ಸೆಪ್ಟಂಬರ್ 21ನೇ 2014 ರಂದು ಬಿ.ಎಂ.ಶ್ರೀ ಕಲಾಭವನದ ಎಂ.ವಿ.ಸೀ. ಸಭಾಂಗಣದಲ್ಲಿ ನಡೆದ 34ನೇ ಸರ್ವಸದಸ್ಯರ ಸಭೆಯಲ್ಲಿ ಕಾರ್ಯಸಮಿತಿಯು ಮಂಡಿಸಿದ 1–4–2013 ರಿಂದ 31–3–2014ರ ವರೆಗಿನ ಕಾರ್ಯಕಲಾಪಗಳ ವರದಿ:

ಸನ್ಮಾನ್ಯ ಸದಸ್ಯರೇ,

ಮಾನ್ಯ ಸದಸ್ಯರ ಸಹಾಯ–ಸಹಕಾರಗಳಿಂದ ಪ್ರತಿಷ್ಠಾನವು 2014ರ **ಮೇ 6ಕ್ಕೆ 34 ವರ್ಷಗಳನ್ನು** ದಾಟಿ, 35ನೇ ಹರೆಯದಲ್ಲಿದೆ. ಡಾ. ಪಿ.ವಿ. ನಾರಾಯಣ ಮತ್ತು ಪ್ರೊ. ಎಂ.ಎಚ್. ಕೃಷ್ಣಯ್ಯ ಅವರ ಮಾರ್ಗದರ್ಶನ ಮತ್ತು ನಿರಂತರ ಭಾಗವಹಿಸುವಿಕೆಯಿಂದ ಸಂಸ್ಥೆ ಅತ್ಯುತ್ತಮ ಕಾರ್ಯಕ್ರಮಗಳನ್ನು ನಡೆಸುತ್ತಿದೆ.

ಪ್ರತಿಷ್ಠಾನದ ಜೊತೆ ಒಂದಿಲ್ಲೊಂದು ಬಗೆಯಲ್ಲಿ ನಿಕಟ ಸಂಬಂಧವನ್ನು ಪಡೆದಿದ್ದ ಹಾಗೂ ಇತ್ತೀಚೆಗೆ ನಿಧನರಾದ –ಶ್ರೀ ಅ.ಲ. ನರಸಿಂಹನ್, ಡಾ. ನಿರುಪಮಾ, ಡಾ.ಕೆ.ವಿ. ರಮೇಶ್, ಪ್ರೊ. ಎನ್. ಬಸವಾರಾಧ್ಯ, ಪ್ರೊ. ಸುಧಾಕರ, ಡಾ. ಎಚ್.ಕೆ. ನಾಗರಾಜ, ಶ್ರೀ ಟಿ. ನಾಗರಾಜ್, (ಸಮಿತಿ ಸದಸ್ಯರು), ನೀಲತ್ತಹಳ್ಳಿ ಕಸ್ತೂರಿ, ಶ್ರೀಕಂಠದತ್ತ ನರಸಿಂಹರಾಜ ಒಡೆಯರ್, ಡಾ.ಜಿ.ಎಸ್. ಶಿವರುದ್ರಪ್ಪ, ಡಾ. ಯು. ಆರ್. ಅನಂತಮೂರ್ತಿ, ಬಿ.ಕೆ.ಎಸ್. ಅಯ್ಯಂಗಾರ್, ಶ್ರೀಮತಿ ಮಾಯಾರಾವ್, ಡಾ.ನಾ. ಸುಬ್ರಹ್ಮಣ್ಯ, ಶ್ರೀ ಗೋವಿಂದರಾವ್ ಜಾಲಿಹಾಲ ಇವರೆಲ್ಲರಿಗೂ ಈ ಸಭೆಯು ಸಂತಾಪ ಸೂಚಿಸುತ್ತದೆ.

**ಸದಸ್ಯ ಸಂಪತ್ತು**

| ವಿವರಗಳು | 2013 | 2014 |
|---|---|---|
| ಆಜೀವ ಸದಸ್ಯರು | 547 | 582 |
| ದಾನಿ ಸದಸ್ಯರು | 12 | 11 |
| ವಿಶೇಷ ದಾನಿ ಸದಸ್ಯರು | 03 | 02 |
| ಅಭಿಮಾನಿ ಸದಸ್ಯರು | 02 | 02 |
| ಸಂಘ ಸಂಸ್ಥೆ ಸದಸ್ಯರು | 03 | 03 |
| ಸಾಮಾನ್ಯ ಸದಸ್ಯರು | 13 | 08 |
| ಒಟ್ಟು | 585 | 608 |

## ಕಾರ್ಯಕಾರಿಸಮಿತಿ ಮತ್ತು ಉಪಸಮಿತಿಗಳು:

ಕಾರ್ಯಕಾರಿ ಸಮಿತಿ ಮತ್ತು ಉಪಸಮಿತಿಗಳು ಕಾಲಕಾಲಕ್ಕೆ ಅವಶ್ಯಕವಾದ ದಿನಗಳಲ್ಲಿ ಸಭೆ ಸೇರಿ ಸಂಸ್ಥೆಯ ಬೆಳವಣಿಗೆಗೆ ಸಹಕರಿಸಿದೆ. ಎಲ್ಲಾ ಸಂಯೋಜಕರು, ಸದಸ್ಯರುಗಳಿಗೆ ಪ್ರತಿಷ್ಠಾನ ಅಭಾರಿಯಾಗಿದೆ.

### 33ನೇ ಸರ್ವಸದಸ್ಯರ ಸಭೆಯ ನಡಾವಳಿಗಳು

ದಿನಾಂಕ 25/12/2013 ರಂದು 33ನೇ ಸರ್ವಸದಸ್ಯರ ಸಭೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾದ ಡಾ॥ ಪಿ.ವಿ. ನಾರಾಯಣ ಅದರ ಅಧ್ಯಕ್ಷತೆಯಲ್ಲಿ ಬೆಳಗ್ಗೆ 10–30ಕ್ಕೆ ಪ್ರಾರಂಭವಾಯಿತು. ಆದರೆ ಸಭೆಯಲ್ಲಿ ಕನಿಷ್ಠ ಸದಸ್ಯರು (30) ಹಾಜರಾಗದ ಕಾರಣ ಸಭೆಯನ್ನು 30 ನಿಮಿಷ ಮುಂದೂಡಲಾಯಿತು.

ಮುಂದೂಡಿದ ಸಭೆಯನ್ನು 11 ಗಂಟೆಗೆ ಪ್ರತಿಷ್ಠಾನದ ಅಧ್ಯಕ್ಷರಾದ ಡಾ॥ ಪಿ.ವಿ. ನಾರಾಯಣ ಅವರ ಅಧ್ಯಕ್ಷತೆಯಲ್ಲಿ ಪ್ರಾರಂಭವಾಯಿತು.

1. **ಪ್ರಾರ್ಥನೆ, ಸ್ವಾಗತ ಮತ್ತು ಅಗಲಿದ ಸದಸ್ಯರಿಗೆ ಸಂತಾಪ ಸೂಚಿಸುವುದು:**

   ಪ್ರಾರ್ಥನೆಗೆ ಮೊದಲು ಇತ್ತೀಚೆಗೆ ನಿಧನರಾದ ಪ್ರೊ. ಎನ್. ಬಸವಾರಾಧ್ಯ, ಶ್ರೀ ಶ್ರೀಕಂಠದತ್ತ ನರಸಿಂಹರಾಜ ಒಡೆಯರ್, ಪ್ರೊ॥ ಎಸ್. ಆರ್. ಮಳಗಿ ಮತ್ತು ಡಾ॥ ಜಿ.ಎಸ್. ಶಿವರುದ್ರಪ್ಪನವರಿಗೆ ಒಂದು ನಿಮಿಷ ಮೌನ ಆಚರಿಸುವ ಮುಖಾಂತರ ಸಭೆ ಶ್ರದ್ಧಾಂಜಲಿಯನ್ನು ಅರ್ಪಿಸಿತು.

   ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಗೌರವಾಧ್ಯಕ್ಷರಾದ ಪ್ರೊ. ಎಂ. ಎಚ್. ಕೃಷ್ಣಯ್ಯನವರೂ ವೇದಿಕೆಯ ಮೇಲೆ ಉಪಸ್ಥಿತರಿದ್ದರು.

   ಶ್ರೀಮತಿ ಎಸ್. ರಮಾದೇವಿ ವಿಶ್ವೇಶ್ವರಯ್ಯನವರು ಪ್ರಾರ್ಥನೆಯನ್ನು ಮಾಡಿದರು.

   ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಗೌರವ ಕಾರ್ಯದರ್ಶಿಗಳಾದ ಶ್ರೀ ಎಸ್.ವಿ. ಶ್ರೀನಿವಾಸರಾವ್ ಅವರು ಸರ್ವರಿಗೂ ಸ್ವಾಗತವನ್ನು ಕೋರಿದರು.

2. **ಸರ್ವಸದಸ್ಯರ ಸಭೆಯ ತಿಳಿವಳಿಕೆ ಪತ್ರವನ್ನು ಓದಿ ಸ್ಥಿರೀಕರಿಸುವುದು:**

   ಸರ್ವಸದಸ್ಯರ ಸಭೆಯ ತಿಳಿವಳಿಕೆ ಪತ್ರವನ್ನು ಗೌರವ ಕಾರ್ಯದರ್ಶಿಗಳಾದ ಶ್ರೀ ಎಸ್.ವಿ. ಶ್ರೀನಿವಾಸರಾವ್ ಅವರು ಓದಿದರು. ಅದನ್ನು ಸಭೆ ಸ್ಥಿರೀಕರಿಸಿತು.

3. **2012–13ನೇ ಸಾಲಿನ ಆಡಳಿತ ವರದಿಯನ್ನು ಅಂಗೀಕರಿಸುವುದು:**

   2012–13ನೇ ಸಾಲಿನ ಆಡಳಿತ ವರದಿಯನ್ನು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಮತ್ತೋರ್ವ ಗೌರವ ಕಾರ್ಯದರ್ಶಿಗಳಾದ ಪ್ರೊ॥ ಜಿ. ಅಬ್ದುಲ್ ಬಷೀರ್ ಅವರು ಮಂಡಿಸಿದರು. ವರದಿಯನ್ನು ಶ್ರೀ ಎಂ.ಜಿ. ನಾಗರಾಜ ಅವರು ಸೂಚಿಸಿದರು. ಪ್ರೊ॥ ಜಿ. ಅಶ್ವತ್ಥನಾರಾಯಣ ಅವರು ಅನುಮೋದಿಸಿದರು. ಅದನ್ನು ಸಭೆ ಅಂಗೀಕರಿಸಿತು.

4. **2012–13ನೇ ಸಾಲಿನ ಲೆಕ್ಕ ಪರಿಶೋಧಕರು ನೀಡಿರುವ ಆಯವ್ಯಯ ಲೆಕ್ಕ ತಃಖ್ತೆಗಳನ್ನು ಅನುಮೋದಿಸುವುದು:**

   2012–13ನೇ ಸಾಲಿನ ಲೆಕ್ಕ ಪರಿಶೋಧಕರು ನೀಡಿರುವ ಆಯ–ವ್ಯಯ ಲೆಕ್ಕ ತಃಖ್ತೆಗಳನ್ನು ಪ್ರತಿಷ್ಠಾನದ ಗೌರವ ಕೋಶಾಧ್ಯಕ್ಷರಾದ ಶ್ರೀ ಎಂ.ಎಸ್. ರಾಮಪ್ರಸಾದ್ ಅವರು ಮಂಡಿಸಿದರು. ಲೆಕ್ಕ ಪರಿಶೋಧಕರ ವರದಿಯನ್ನು ಶ್ರೀ ರಾ.ನಂ. ಚಂದ್ರಶೇಖರ್ ಅವರು ಸೂಚಿಸಿದರು. ಡಾ॥ ವಿಜಯಾ ಸುಬ್ಬರಾಜ್ ಅವರು ಅನುಮೋದಿಸಿದರು. ಸಭೆ ಸರ್ವಾನುಮತದಿಂದ ಅದನ್ನು ಅಂಗೀಕರಿಸಿತು. ಲೆಕ್ಕ ಪರಿಶೋಧಕರ ಸೇವೆಯನ್ನು ಸ್ಮರಿಸಿಕೊಳ್ಳಲಾಯಿತು.

5. **2013–14ನೇ ಸಾಲಿನ ಅಂದಾಜು ಆಯ–ವ್ಯಯ ಪಟ್ಟಿಯನ್ನು ಅನುಮೋದಿಸುವುದು:**

   2013–14ನೇ ಸಾಲಿನ ಅಂದಾಜು ಆಯ–ವ್ಯಯ ಪಟ್ಟಿಯನ್ನು ಪ್ರತಿಷ್ಠಾನದ ಗೌರವ ಕೋಶಾಧ್ಯಕ್ಷರಾದ ಶ್ರೀ ಎಂ.ಎಸ್. ರಾಮಪ್ರಸಾದ್ ಅವರು ಮಂಡಿಸಿದರು. ಡಾ॥ ಇಂದಿರಾ ಹೆಗ್ಗಡೆಯವರು ಸೂಚಿಸಿದರು.

   ಡಾ॥ ಎಚ್. ಶೇಷಗಿರಿರಾವ್ ಅವರು ಅನುಮೋದಿಸಿದರು. ಅದನ್ನು ಸಭೆ ಅಂಗೀಕರಿಸಿತು.

6. **2013–14 ನೇ ಸಾಲಿಗೆ ಲೆಕ್ಕ ಪರಿಶೋಧಕರ ನೇಮಕ ಮಾಡುವುದು:**

   2013–14 ನೇ ಸಾಲಿಗೆ ಲೆಕ್ಕ ಪರಿಶೋಧಕರ ನೇಮಕ ಮಾಡುವ ಬಗ್ಗೆ ಗೌರವ ಕೋಶಾಧ್ಯಕ್ಷರಾದ ಶ್ರೀ ಎಂ.ಎಸ್. ರಾಮಪ್ರಸಾದ್ ಅವರು ಪ್ರಸ್ತಾಪಿಸಿದರು. ಈಗಿರುವ ಲೆಕ್ಕಪರಿಶೋಧಕರನ್ನೇ ಮುಂದುವರಿಸಲು ಸಭೆ ತೀರ್ಮಾನಿಸಿತು. ಅವರಿಗೆ 8,000/– ರೂ. ಗಳ ವಾರ್ಷಿಕ ಶುಲ್ಕವನ್ನು ಮುಂದುವರಿಸಲು ಸಭೆ ಒಪ್ಪಿಗೆ ನೀಡಿತು.

7. **ನಿಯಮಾನುಸಾರ ನಿವೃತ್ತರಾಗಲಿರುವ ಕಾರ್ಯಸಮಿತಿ ಸದಸ್ಯರ ಸ್ಥಾನಗಳಿಗೆ ಚುನಾವಣೆ ನಡೆಸುವುದು:**

ಪ್ರತಿವರ್ಷ ಪ್ರತಿಷ್ಠಾನ ಆಯ್ಕೆ ಸದಸ್ಯರಲ್ಲಿ ನಿಯಮಾನುಸಾರ 7(ಡಿ) ಮೂರನೇ ಒಂದು ಭಾಗದ ಸದಸ್ಯರು ಅಂದರೆ 4 ಜನ ನಿವೃತ್ತರಾಗಬೇಕಾಗುತ್ತದೆ. ಅವರ ಸ್ಥಾನಕ್ಕೆ ಚುನಾವಣೆ ನಡೆಸುವುದರ ಮೂಲಕ 4 ಜನರನ್ನು ಆರಿಸಬೇಕಾಗುತ್ತದೆ. 2009–10ನೇ ಸಾಲಿನಲ್ಲಿ ಚುನಾಯಿತರಾಗಿದ್ದು 2013ರಲ್ಲಿ ನಿವೃತ್ತರಾಗಬೇಕಾದ ಸದಸ್ಯರು:

1. ಡಾ॥ ನಾ. ಗೀತಾಚಾರ್ಯ
2. ಶ್ರೀ ಎಂ.ಎಸ್. ರಾಮಪ್ರಸಾದ್
3. ಪ್ರೊ. ಜಿ. ಅಶ್ವತ್ಥನಾರಾಯಣ
4. ಶ್ರೀ ಡಿ.ನಂ. ವೆಂಕಟರಮಣಯ್ಯ

   ಶ್ರೀ ಎಂ.ಎಸ್. ರಾಮಪ್ರಸಾದ್ ಮತ್ತು ಶ್ರೀ ಡಿ.ನಂ. ವೆಂಕಟರಮಣಯ್ಯನವರನ್ನು ಸದಸ್ಯರಾಗಿ ಮುಂದುವರಿಯಲು ಸಭೆ ಅನುಮತಿ ನೀಡಿತು. ಇದನ್ನು ಶ್ರೀಮತಿ ರಮಾದೇವಿ ವಿಶ್ವೇಶ್ವರಯ್ಯನವರು ಸೂಚಿಸಿದರು. ಶ್ರೀ ಎಸ್.ಬಿ. ರಾಧಾಕೃಷ್ಣ ಅವರು ಅನುಮೋದಿಸಿದರು. ಹೊಸ ನಿಯಮಾನುಸಾರ ಕಾರ್ಯಕಾರಿ ಸಭೆಯ ಆಡಳಿತ ಮಂಡಳಿಗೆ 4 ಸದಸ್ಯರು ಮತ್ತು 12 ಸದಸ್ಯರುಗಳು ಇರಬೇಕಾಗುತ್ತದೆ. ಇದರ ಪ್ರಕಾರ ಹೊಸ ಸದಸ್ಯರನ್ನು ಆಯ್ಕೆ ಮಾಡಿ ಪಟ್ಟಿಯನ್ನು ಸಿದ್ಧಪಡಿಸಲಾಗಿದೆ. ಆ ಹೆಸರುಗಳು ಕೆಳಕಂಡಂತೆ ಇವೆ.

33ನೇ ಸರ್ವಸದಸ್ಯರ ಸಭೆಯಲ್ಲಿ ಆಯ್ಕೆಗೊಂಡ ಸದಸ್ಯರ ಪಟ್ಟಿ:

1. ಡಾ॥ ಪಿ.ವಿ. ನಾರಾಯಣ
2. ಶ್ರೀ ಎಸ್.ವಿ. ಶ್ರೀನಿವಾಸರಾವ್
3. ಪ್ರೊ॥ ಜಿ. ಅಬ್ದುಲ್ ಬಷೀರ್
4. ಶ್ರೀ ಎಂ.ಎಸ್. ರಾಮಪ್ರಸಾದ್
5. ಶ್ರೀ ಡಿ.ನಂ. ವೆಂಕಟರಮಣಯ್ಯ
6. ಡಾ॥ ಎಂ.ಜಿ. ನಾಗರಾಜ್
7. ಡಾ॥ ಕೆ.ಆರ್. ಗಣೇಶ್
8. ಪ್ರೊ॥ ಅ.ರಾ. ಮಿತ್ರ
9. ಡಾ॥ ವಿಜಯಾ ಸುಬ್ಬರಾಜ್
10. ಪ್ರೊ. ಟಿ.ಎಸ್. ನಾಗಭೂಷಣ
11. ಡಾ॥ ಹೆಚ್. ಜಯಮ್ಮ ಕರಿಯಣ್ಣ
12. ಡಾ॥ ಆರ್. ಲಕ್ಷ್ಮೀನಾರಾಯಣ – ಡಾ॥ ವಿಜಯಾ ಸುಬ್ಬರಾವ್ ಸೂಚಿಸಿದರು – ರಮಾದೇವಿ ವಿಶ್ವೇಶ್ವರ ಅನುಮೋದಿಸಿದರು.
13. ಪ್ರೊ. ಎನ್. ಅನಿಲ್‌ಕುಮಾರ್ – ರಾ.ನಂ. ಚಂದ್ರಶೇಖರ್ ಸೂಚಿಸಿದರು – ದೇವರಾಜಸ್ವಾಮಿ ಅನುಮೋದಿಸಿದರು.
14. ಶ್ರೀ. ಎಚ್. ಶೇಷಗಿರಿರಾವ್ – ಎಂ.ಎಸ್. ಭಾಸ್ಕರ್ ಸೂಚಿಸಿದರು – ಇಂದಿರಾ ಹೆಗ್ಗಡೆ ಅನುಮೋದಿಸಿದರು.
15. ಶ್ರೀ ಬಿ. ಆರ್. ರವೀಂದ್ರನಾಥ್ – ಡಿ.ನಂ. ವೆಂಕಟರಮಣಯ್ಯ ಸೂಚಿಸಿದರು – ಎಸ್.ಟಿ. ರಾಧಾಕೃಷ್ಣ ಅನುಮೋದಿಸಿದರು.
16. ಶ್ರೀ ರಾ.ನಂ. ಚಂದ್ರಶೇಖರ್ – ಕೆ.ಎನ್.ಭಗವಾನ್ ಸೂಚಿಸಿದರು – ಬಿ.ಎಸ್. ಗುರುಪ್ರಸಾದ್ ಅನುಮೋದಿಸಿದರು.

    ಪ್ರತಿಷ್ಠಾನದ ಗೌರವ ಕಾರ್ಯದರ್ಶಿಗಳಾದ ಪ್ರೊ॥ ಜಿ. ಅಬ್ದುಲ್ ಬಷೀರ್ ಅವರು ಸದಸ್ಯರ ಆಯ್ಕೆ ವಿವರಗಳನ್ನು ಪ್ರಕಟಿಸಿದರು.

**8. ಸದಸ್ಯರು ಕಳುಹಿಸಿರುವ ಸಲಹೆ–ಸೂಚನೆಗಳ ಪರಿಶೀಲನೆ:**

ಪ್ರತಿಷ್ಠಾನದ ಸದಸ್ಯರು ಕಳುಹಿಸಿದ ಸಲಹೆ–ಸೂಚನೆಗಳನ್ನು ಪರಿಶೀಲಿಸಲಾಯಿತು. ಸದಸ್ಯರಿಗೆ ಗುರುತಿನ ಚೀಟಿ ನೀಡುವಂತೆ ಶ್ರೀ ಹ.ಚ. ಸತ್ಯನಾರಾಯಣ ಉರಾಳ ಅವರು ಪತ್ರದ ಮೂಲಕ ಸಲಹೆ ನೀಡಿದ್ದರು.

ಸಭೆ ಒಪ್ಪಿತು. ಅದು ಇಷ್ಟರಲ್ಲಿಯೇ ಕಾರ್ಯರೂಪಕ್ಕೆ ಬರಲಿದೆ ಎಂದು ವಿವರವನ್ನು ಗೌರವ ಕಾರ್ಯದರ್ಶಿಗಳಾದ ಶ್ರೀ ಎಸ್.ವಿ. ಶ್ರೀನಿವಾಸರಾವ್ ಅವರು ಉತ್ತರ ನೀಡಿದರು. ಗುರುತಿನ ಚೀಟಿಗೆ ಸದಸ್ಯರ ಭಾವಚಿತ್ರ, ವಿಳಾಸ, ರಕ್ತದ ಗುಂಪು, ದೂರವಾಣಿ ಸಂಖ್ಯೆ, ಇ–ಮೇಲ್ ವಿವರಗಳನ್ನು ಸಂಗ್ರಹಿಸಲಾಗುತ್ತಿದೆ. 600ಕ್ಕೂ ಹೆಚ್ಚು ಸದಸ್ಯರು ಇರುವುದರಿಂದ ಇನ್ನೂ ಪೂರ್ಣ ವಿವರ ಸಂಗ್ರಹವಾಗಿಲ್ಲ.

ನಿಯಮಾವಳಿಗಳನ್ನು ಕನ್ನಡದಲ್ಲಿ ಅನುವಾದಿಸಿ ನೀಡಬೇಕೆಂದು ಶ್ರೀ ಹ.ಚ. ಸತ್ಯನಾರಾಯಣ ಉರಾಳ ಅವರು ಇನ್ನೊಂದು ಪತ್ರದಲ್ಲಿ ಬರೆದಿದ್ದರು. ತಿದ್ದು ಪಡಿಯಾದ ನಿಯಮಾವಳಿಗೆ ಇತ್ತೀಚೆಗೆ ಅನುವಾದಿಸುವ ಪ್ರಕ್ರಿಯೆ ಪ್ರಾರಂಭಿಸಲಾಗುವುದು ಎಂಬ ಸೂಚನೆಯನ್ನು ನೀಡಲಾಯಿತು.

ಭಾನುವಾರದ ದಿನ ದಿನಪತ್ರಿಕೆಗಳನ್ನು ಓದುವ ಒಬ್ಬರು–ಇಬ್ಬರಿಗಾಗಿ ಪ್ರತಿಷ್ಠಾನ ತೆರೆಯಲು ಸಾಧ್ಯವಿಲ್ಲ ಎಂದು ಪ್ರತಿಷ್ಠಾನದ ಅಧ್ಯಕ್ಷರಾದ ಡಾ॥ ಪಿ.ವಿ. ನಾರಾಯಣ ಅವರು ಹೇಳಿದರು. ಆದರೆ ಶ್ರೀ ಡಿ.ನಂ. ವೆಂಕಟರಮಣಯ್ಯನವರು ಒಪ್ಪಲಿಲ್ಲ. ಇವರ ಒತ್ತಾಯವನ್ನು ಸಭೆ ಮನ್ನಿಸಲಿಲ್ಲ. ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಪ್ರತಿವರ್ಷವೂ ಸಮ್ಮೇಳನವನ್ನು ನಡೆಸಬೇಕೆಂದು ಸೂಚಿಸಿದರು. ಇದು ಅಸಾಧ್ಯವಾದ ವಿಚಾರ ಎಂದು ಸಭೆ ಸೂಚಿಸಿತು.

9. **ಇತರೆ ವಿಚಾರಗಳು [ಅಧ್ಯಕ್ಷರ ಒಪ್ಪಿಗೆಯಿಂದ]:**

ಪ್ರತಿಷ್ಠಾನದ ಸದಸ್ಯರಾದ ಶ್ರೀ ಎಚ್. ಶೇಷಗಿರಿರಾವ್ ಅವರ ಸೇವೆಯನ್ನು ಕೃತಜ್ಞತಾಪೂರ್ವಕವಾಗಿ ಸಭೆ ಸ್ಮರಿಸಿಕೊಂಡಿತು. ಹಸ್ತಪ್ರತಿ ವಿವರಗಳನ್ನೂ, ಸ್ಕ್ಯಾನಿಂಗ್, ಆನ್‌ಲೈನ್ ವಿವರಗಳನ್ನೂ ಎಚ್. ಶೇಷಗಿರಿರಾವ್ ಅವರು ನೀಡಿದರು.

10. **ಅಧ್ಯಕ್ಷರ ಭಾಷಣ:**

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರೂ 33ನೇ ಸರ್ವಸದಸ್ಯರ ಸಭೆಯ ಅಧ್ಯಕ್ಷತೆಯನ್ನೂ ವಹಿಸಿದ್ದ ಡಾ॥ ಪಿ.ವಿ. ನಾರಾಯಣ ಅವರು "ಶ್ರೀ ಸಾಹಿತ್ಯ ಪ್ರಶಸ್ತಿ" ಪುಸ್ತಕ ಪ್ರಕಟಣೆಗಳು, ಪ್ರತಿಷ್ಠಾನ ನಡೆಸುತ್ತಾ ಬರುತ್ತಿರುವ ದತ್ತಿ ಮತ್ತು ಸಾಹಿತ್ಯೋಪಾಸಕರು ಲೇಖನಮಾಲೆ, ಸಿರಿಸಂಗೀತ, ಸಿರಿಕಂಠ ವೇದಿಕೆ ಕಾರ್ಯಕ್ರಮಗಳು ಮತ್ತು ಕಛೇರಿ ಸಿಬ್ಬಂದಿಯ ಸೇವೆಯ ಬಗ್ಗೆ ವಿಶೇಷವಾಗಿ ಅಧ್ಯಕ್ಷ ಭಾಷಣದಲ್ಲಿ ಪ್ರಸ್ತಾಪಿಸಿದರು. ಆಂತರಿಕ ಲೆಕ್ಕ ಪರಿಶೋಧಕರಾದ ಶ್ರೀ ಡಿ.ನಂ. ವೆಂಕಟರಮಣಯ್ಯನವರ ಸೇವೆಯನ್ನು ಈ ಸಂದರ್ಭದಲ್ಲಿ ಕೃತಜ್ಞತೆಯಿಂದ ಸ್ಮರಿಸಿಕೊಳ್ಳಲಾಯಿತು.

11. **ವಂದನಾರ್ಪಣೆ:**

ಪ್ರತಿಷ್ಠಾನದ ಗೌರವ ಕಾರ್ಯದರ್ಶಿಗಳಾದ ಶ್ರೀ ಎಸ್.ವಿ. ಶ್ರೀನಿವಾಸರಾವ್ ಅವರು ಸರ್ವ ಸದಸ್ಯರಿಗೂ ವಂದನೆಗಳನ್ನು ಅರ್ಪಿಸಿದರು. ನಂತರ ಸಭೆಯು ಮುಕ್ತಾಯವಾಯಿತು.

ಅಧ್ಯಕ್ಷರು — ಗೌರವ ಕಾರ್ಯದರ್ಶಿಗಳು

## ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ–21–09–2014

**ದಿನಾಂಕ: 1–4–2013 ರಿಂದ 31–3–2014ರವರೆಗೆ ನಡೆದ ಕಾರ್ಯಕ್ರಮಗಳ ವಿವರ.**

1. ದತ್ತಿ ಕಾರ್ಯಕ್ರಮಗಳು–27
2. ಸಿರಿ ಸಂಗೀತ ಕಾರ್ಯಕ್ರಮಗಳು–11
3. ಸಾಹಿತ್ಯೋಪಾಸಕರು ಲೇಖನಮಾಲೆ ಕಾರ್ಯಕ್ರಮಗಳು–6
4. ದತ್ತಿ ಪ್ರಶಸ್ತಿ ಪ್ರದಾನ ಕಾರ್ಯಕ್ರಮಗಳು–
   ಸಾವಿತ್ರಮ್ಮ ದತ್ತಿ ಸಾಹಿತ್ಯ ಪ್ರಶಸ್ತಿ
   ಶಾರದಮ್ಮ ಜಿ. ಹನುಮಯ್ಯ ಪ್ರಶಸ್ತಿ
   ಎಂ.ವಿ.ಸೀ. ಸಾಹಿತ್ಯ ಪುರಸ್ಕಾರ
   ಶ್ರೀ ಸಾಹಿತ್ಯ ಪ್ರಶಸ್ತಿ
5. ಸಂಶೋಧನ ದಿನ: ಎಂ. ಫಿಲ್ ವಿದ್ಯಾರ್ಥಿಗಳಿಗೆ ಪದವಿ ಪತ್ರ ಪ್ರದಾನ ಸಮಾರಂಭ–2
   ಸಂಕ್ಷಿಪ್ತ ಪಂಪಭಾರತ ತರಗತಿಗಳು
6. ಸಿರಿಕಂಠ ವೇದಿಕೆ ಉಪನ್ಯಾಸ–1
   ಹಸ್ತಪ್ರತಿ ಸಮಾವೇಶ–2
   ಹಸ್ತಪ್ರತಿ ಕಾರ್ಯಾಗಾರ–3
7. ಕವಿದಿನ–ಬೇಂದ್ರೆ: ಪ್ರತಿಷ್ಠಾನದ ಸದಸ್ಯರ ಕವಿಸಮ್ಮೇಳನ
8. ಪ್ರೊ. ಎಂ.ವಿ.ಸೀ. ಅವರ ತೈಲಚಿತ್ರ ಅನಾವರಣ, ಹೂದನಿ ಭಾವಗೀತೆಗಳ ಧ್ವನಿಸುರುಳಿ ಬಿಡುಗಡೆ ಕಾರ್ಯಕ್ರಮ
9. ಉದಯಭಾನು ಕಲಾಸಂಘಕ್ಕೆ 1001 ಗ್ರಂಥಗಳ ಕೊಡುಗೆ ಸಮಾರಂಭ: ಶ್ರೀಉತ್ಸವ.
10. ನೂರರ ನಾಡೋಜ ಪ್ರೊ. ಜಿ. ವೆಂಕಟಸುಬ್ಬನವರಿಗೆ ಸನ್ಮಾನ ಹಾಗೂ ಗೋಷ್ಠಿಗೌರವ.
11. ಪ್ರಾಚೀನ ಕನ್ನಡ ಸಾಹಿತ್ಯ ಕಮ್ಮಟ ಸಮಾರೋಪ ಸಮಾರಂಭ,
12. ಆದಿ ಚುಂಚನಗಿರಿ ಮಹಾಸಂಸ್ಥಾನದ ನೂತನ ಪೀಠಾಧ್ಯಕ್ಷರಾದ ಶ್ರೀ ಶ್ರೀ ಶ್ರೀ ನಿರ್ಮಲಾನಂದನಾಥ ಸ್ವಾಮೀಜಿಯವರ ಅಭಿನಂದನ ಸಮಾರಂಭ ಮತ್ತು ಶತಾಯುಷಿ ನಾಡೋಜ ಪ್ರೊ. ಜಿ. ವೆಂಕಟಸುಬ್ಬಯ್ಯನವರ ಶತಮಾನೋತ್ಸವಾಚರಣೆ.
13. ನೆನಪಿನ ವಿಚಾರಗೋಷ್ಠಿಗಳು– ಪ್ರೊ. ಡಿ. ಲಿಂಗಯ್ಯ ಒಂದು ನೆನಪು, ಶ್ರೀ ದೇವೀರಪ್ಪ ಒಂದು ನೆನಪು, ಪ್ರೊ. ಜಿ. ಶ್ರೀನಿವಾಸರಾಜು ನೆನಪಿನ ವಿಚಾರಗೋಷ್ಠಿ, ಪ್ರೊ. ವಿ.ಎಂ. ಇನಾಂದಾರ್ ನೆನಪು.
14. **ಹಸ್ತಪ್ರತಿ ವಿಭಾಗದ ಚಟುವಟಿಕೆಗಳು**

    ನಮ್ಮ ಹಸ್ತಪ್ರತಿ ವಿಭಾಗದಲ್ಲಿ ಅಮೂಲ್ಯವಾದ ಸುಮಾರು 1,400 ಹಸ್ತಪ್ರತಿಗಳಿವೆ. ಕನ್ನಡ, ತಮಿಳು, ತೆಲುಗು, ಸಂಸ್ಕೃತ, ತಿಗಳಾರಿ, ನಂದಿನಾಗರಿ ಮತ್ತು ಗ್ರಂಥಲಿಪಿ ಮತ್ತು ಹಲವು ಭಾಷೆಗಳಲ್ಲಿರುವ ಹಸ್ತಪ್ರತಿಗಳ ಸಂರಕ್ಷಣೆ ಮತ್ತು ಡಿಜಿಟಲೈಜೇಷನ್ ಕೆಲಸ ಭರದಿಂದ ಸಾಗಿದೆ. ಈಗಾಗಲೇ ಸುಮಾರು 400ಕ್ಕೂ ಹೆಚ್ಚು ಕೃತಿಗಳನ್ನು ಡಿಜಿಟಲೀಕರಣ ಮಾಡಲಾಗಿದೆ. ಈ ಕೆಲಸದಲ್ಲಿ ಶ್ರೀ ಗುರುಪ್ರಸಾದ್, ಶ್ರೀಮತಿ ವೀಣಾ ಮತ್ತು ಶ್ರೀಮತಿ ಮಧುರಾ ಅವರು ನಿರ್ದೇಶಕರಾದ ಶ್ರೀ ಎಚ್. ಶೇಷಗಿರಿರಾವ್ ಅವರ ನೇತೃತ್ವದಲ್ಲಿ ತೊಡಗಿದ್ದಾರೆ. ಈಗಾಗಲೇ 3,500ಕ್ಕೂ ಹೆಚ್ಚು ಕೃತಿಗಳ ಸೂಚಿಯ ಕರಡುಪ್ರತಿ ಸಿದ್ಧವಾಗಿದೆ. ವಿಶೇಷವೆಂದರೆ ಎಂ.ಎಲ್.ಎ. ಮತ್ತು ಎಂ.ಇ.ಎಸ್. ಕಾಲೇಜಿನ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಹಸ್ತಪ್ರತಿ ಸಂರಕ್ಷಣೆಯ ಒಂದು ವಾರದ ಕಾರ್ಯಾಗಾರವನ್ನು ಈಗಾಗಲೇ ನಡೆಸಲಾಗಿದೆ. ಅಲ್ಲದೇ ಇನ್ನೂ ಎರಡು–ಮೂರು ಕಾಲೇಜುಗಳಲ್ಲಿ ಹಸ್ತಪ್ರತಿ ಪ್ರದರ್ಶನವನ್ನು ಏರ್ಪಡಿಸಲಾಗಿದೆ. ಈ ಕೆಲಸದಲ್ಲಿ ಶ್ರೀಮತಿ ಸೀತಾಲಕ್ಷ್ಮೀ, ಶ್ರೀಮತಿ ನರ್ಮದಾ, ಶ್ರೀ ರಾಘವೇಂದ್ರ ಮತ್ತು ಶ್ರೀ ಗುರುಪ್ರಸಾದ್ ಅವರುಗಳು ತಾಂತ್ರಿಕ ನೆರವು ನೀಡುತ್ತಿದ್ದಾರೆ. ಈ ಯೋಜನೆಗೆ ಇನ್ನು ಅಧಿಕ ಮಾನವ ಸಂಪನ್ಮೂಲದ ಅಗತ್ಯತೆ ಇದೆ.. ದಿನಾಂಕ 27–9–2014 ರಿಂದ 30–9–2014ರವರೆಗೆ ಹಂಪಿ ಕನ್ನಡ ವಿಶ್ವವಿದ್ಯಾಲಯದ ಗುಲ್ಬರ್ಗಾ ಕನ್ನಡ ಅಧ್ಯಯನ ಪೀಠದಲ್ಲಿ ನಡೆಯುವ ಹಸ್ತಪ್ರತಿ ಸಮ್ಮೇಳನದಲ್ಲಿ ಹಸ್ತಪ್ರತಿ ಆನ್‌ಲೈನ್ ಅಧ್ಯಯನ ಕುರಿತು ಪ್ರಾತ್ಯಕ್ಷಿಕೆಯನ್ನು ಶ್ರೀ ಎಚ್. ಶೇಷಗಿರಿ ರಾವ್‌ರವರು ನೀಡಲಿದ್ದಾರೆ. ಸದ್ಯದಲ್ಲಿ ಆನ್‌ಲೈನ್ ಅಧ್ಯಯನ ಕುರಿತು ತರಬೇತಿ ಕಾರ್ಯಾಗಾರ ನಡೆಸುವ ಯೋಜನೆಯಿದೆ.

15. ಗ್ರಂಥ ಸಂಪತ್ತು ( ಗ್ರಂಥ ಭಂಡಾರ) 2013 ಸೇರ್ಪಡೆ 2014
ಗ್ರಂಥ-ಪುಸ್ತಕಗಳು 22725

ಪ್ರಸ್ತುತ ವರ್ಷದಲ್ಲಿ ಗ್ರಂಥಾಲಯಕ್ಕೆ- ದಾನವಾಗಿ ನೀಡಿರುತ್ತಾರೆ. ಅವರಿಗೆ ಪ್ರತಿಷ್ಠಾನದಿಂದ ವಂದನೆಗಳು. ಗ್ರಂಥಾಲಯದ ಪೂರ್ಣ ಗಣಕೀಕೃತ ಕಾರ್ಯ ಮುಗಿದಿದ್ದು, ಇದಕ್ಕಾಗಿ ಶ್ರಮಿಸಿದ ಶ್ರೀ ಎಸ್.ಸಿ. ಪಾಟೀಲ್ ಮತ್ತು ಶ್ರೀಮತಿ ವೀಣಾ ಅವರಿಗೆ ಸಂಸ್ಥೆ ಅಭಿನಂದಿಸುತ್ತದೆ.

16. ಉಚಿತ ವಾಚನಾಲಯ- ಸಾರ್ವಜನಿಕರ ಅನುಕೂಲಕ್ಕಾಗಿ ಉಚಿತವಾಚನಾಲಯವನ್ನು ನಡೆಸುತ್ತಿದ್ದು ಪ್ರಸ್ತುತ, ಪ್ರಜಾವಾಣಿ, ವಿಜಯವಾಣಿ, ಉದಯವಾಣಿ, ಸಂಯುಕ್ತ ಕರ್ನಾಟಕ, ವಿಜಯ ಕರ್ನಾಟಕ, ಹೊಸದಿಗಂತ, ಕನ್ನಡ ಪ್ರಭ, ಡೆಕ್ಕನ್ ಹೆರಾಲ್ಡ್, ಎಂಬ ಒಟ್ಟು 8 ಪತ್ರಿಕೆಗಳು ಹಾಗೂ 10 ಪುರವಣಿಗಳು ಉಪಯೋಗವಾಗುತ್ತಿದೆ. ಪ್ರತಿದಿನ ಸರಾಸರಿ 20 ವಾಚಕರು ಉಪಯೋಗ ಪಡೆಯುತ್ತಿದ್ದಾರೆ.

## ಪ್ರತಿಷ್ಠಾನದ ನಿರಂತರ ಚಟುವಟಿಕೆಗಳು

**ಅ. ಕರ್ನಾಟಕ ಲೋಚನ:** 1982ರಿಂದ ನಿರಂತರವಾಗಿ ಕರ್ನಾಟಕ ಲೋಚನ ವಿದ್ವತ್ ಪತ್ರಿಕೆ ತ್ರೈಮಾಸಿಕ ನಿಯತಕಾಲಿಕೆ ಪ್ರಕಟವಾಗುತ್ತಿದೆ. ಪತ್ರಿಕೆಗೆ 45 ಆಜೀವ ಸದಸ್ಯರಿದ್ದು, 15 ಜನ ವಾರ್ಷಿಕ ಸದಸ್ಯರಿದ್ದು, ಅದರೊಂದಿಗೆ ಪ್ರತಿಷ್ಠಾನದ ಸದಸ್ಯರಿಗೆ ಉಚಿತವಾಗಿ ನೀಡಲಾಗುತ್ತಿದೆ. ಸಂಪಾದಕರಾಗಿ ಪ್ರೊ .ಜಿ. ಅಬ್ದುಲ್ ಬಷೀರ್ ಅವರೊಂದಿಗೆ ಸಂಪಾದಕ ಮಂಡಳಿ ಕಾರ್ಯನಿರ್ವಹಿಸುತ್ತಿದೆ ಅವರಿಗೆ ಕೃತಜ್ಞತೆಗಳು.

**ಆ. ವಾರ್ತಾಪತ್ರ:** ಸಂಸ್ಥೆಯ ತ್ರೈಮಾಸಿಕ ಪತ್ರಿಕೆಯಾಗಿ 2007ರಿಂದ ಸಂಸ್ಥೆಯ ಎಲ್ಲಾ ಚಟುವಟಿಕೆಗಳು ಕನ್ನಡಿಯಂತೆ ಪ್ರಕಟವಾಗುತ್ತಿದೆ.

**ಇ. ಸಿರಿಕಂಟ-ವಿದ್ಯಾರ್ಥಿಗೋಷ್ಠಿ:** ಸಂಸ್ಥೆಯು ಪ್ರಾರಂಭದಿಂದಲೂ ಮೂಲ ಉದಯೋನ್ಮುಖ ಕವಿ, ಲೇಖಕ, ಸಂಶೋಧಕರನ್ನು ಪ್ರೋತ್ಸಾಹಿಸಲು ಸಾಹಿತ್ಯವೇದಿಕೆಯನ್ನು ಒದಗಿಸುತ್ತಿದೆ. ಸ್ನಾತಕೋತ್ತರ, ಎಂ.ಫಿಲ್, ಪಿಎಚ್.ಡಿ ವಿದ್ಯಾರ್ಥಿಗಳು ಸಂವಾದ ಕಾರ್ಯಕ್ರಮಗಳನ್ನು ನಡೆಸಲಾಗುತ್ತಿದ್ದು ಶ್ರೀ ರಮೇಶ್ ಅವರು ಸಂಚಾಲಕರಾಗಿ ಸಹಕರಿಸುತ್ತಿದ್ದಾರೆ.

**ಈ. ಹಸ್ತಪ್ರತಿ ಸೇವಾಕೇಂದ್ರ:** ರಜತೋತ್ಸವ ನೆನಪಿಗಾಗಿ ಈ ಸೇವಾಕೇಂದ್ರವನ್ನು ಆರಂಭಿಸಲಾಗಿದೆ.

**ಉ. ಹಳಗನ್ನಡ- ಹಸ್ತಪ್ರತಿ ಶಿಬಿರಗಳು:** ಹಸ್ತಪ್ರತಿ ಸಂರಕ್ಷಣೆ, ಸಂಪ್ರತಿ- ಲಿಪಿಗಳ ಅಭ್ಯಾಸ ಮತ್ತು ಹಳಗನ್ನಡ ಕಾವ್ಯ, ಅಭ್ಯಾಸ, ಓದುವಿಕೆ, ಅರ್ಥಗ್ರಹಿಕೆ, ವಿಶ್ಲೇಷಣೆ ಕುರಿತು ಕಾರ್ಯಾಗಾರ ನಡೆಸಲಾಗುತ್ತಿದೆ.

**ಊ. ಪುಸ್ತಕ ಪ್ರಕಟಣೆ:** ಪ್ರತಿಷ್ಠಾನವು ಪ್ರಾರಂಭದಿಂದ ಈವರೆಗೆ 151 ಗ್ರಂಥಗಳನ್ನು ಪ್ರಕಟಿಸಿದೆ. ಪ್ರಸಕ್ತ ವರ್ಷದಲ್ಲಿ
1. ಹಳತು ಹೊನ್ನು
2. ಹಳಗನ್ನಡ ವ್ಯಾಕರಣ
3. ಹಸ್ತಪ್ರತಿ ಸಮಾವೇಶ ಭಾಗ-2
4. ಪ್ರೊ. ಡಿ. ಲಿಂಗಯ್ಯ-ಜೀವನ ಮತ್ತು ಸಾಹಿತ್ಯ ಸಾಧನೆ
5. ಎಂ.ವಿ.ಸೀ. – ಜೀವನ ಮತ್ತು ಸಾಹಿತ್ಯ ಸಾಧನೆ
6. ಪ್ರಾಚೀನ ಕನ್ನಡ ಸಾಹಿತ್ಯ ನಾಡು, ನುಡಿ ಚಿಂತನೆ
7. ಸಿರಿಕಂಟ

ಎಂಬ ಗ್ರಂಥಗಳನ್ನು ಪ್ರಕಟಿಸಿ, ಅವಶ್ಯಕವಿರುವ ಗ್ರಂಥಗಳನ್ನು ಮರುಮುದ್ರಣ ಮಾಡಿದೆ.

**ಋ. ದತ್ತಿನಿಧಿಗಳು:** ಪ್ರತಿಷ್ಠಾನದಲ್ಲಿ ಒಟ್ಟು 47 ದತ್ತಿನಿಧಿಗಳು ಸ್ಥಾಪಿತವಾಗಿದೆ. ಪ್ರಸ್ತುತ ವರ್ಷದಲ್ಲಿ
1. ಬಿ.ಎಂ.ಶ್ರೀ ದತ್ತಿ ಶ್ರೀ ಸಾಹಿತ್ಯ ಪ್ರಶಸ್ತಿ
2. ದಿ. ಗೋವಿಂದರಾವ್ ಜಾಲಿಹಾಲ (ಜಾಗೋ) ದತ್ತಿ

ವರದಿ ವರ್ಷದಲ್ಲಿ ಎಲ್ಲ ದತ್ತಿ ಕಾರ್ಯಕ್ರಮಗಳನ್ನು ನಡೆಸಲಾಗಿದೆ.

**ಎ. ಶೈಕ್ಷಣಿಕ ಕಾರ್ಯಕ್ರಮಗಳು:**

**ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದಿಂದ ಪಿಎಚ್.ಡಿ ಮತ್ತು ಎಂ.ಫಿಲ್ ಪದವಿ:**

2003 ರಿಂದ ಪ್ರತಿಷ್ಠಾನ ಕನ್ನಡ ವಿಶ್ವವಿದ್ಯಾಲಯದಿಂದ ಸ್ನಾತಕೋತ್ತರ ಸಂಶೋಧನ ಕೇಂದ್ರ ಎಂದು ಮಾನ್ಯತೆ ಪಡೆದಿದೆ. ಹತ್ತು ನುರಿತ ಉಪನ್ಯಾಸಕರು 55 ಎಂ.ಫಿಲ್ ವಿದ್ಯಾರ್ಥಿಗಳು ಫಲಾನುಭವಿಗಳಾಗಿದ್ದಾರೆ. ಹಾಗೂ 9 ಜನ ವಿದ್ಯಾರ್ಥಿಗಳು ಪಿಎಚ್.ಡಿ ಮಾರ್ಗದರ್ಶನ ಪಡೆಯುತ್ತಿದ್ದಾರೆ. ಈ ಕೇಂದ್ರದ ಸಂಯೋಜನಾಧಿಕಾರಿಯಾಗಿ ಡಾ॥ ವಿಜಯಾಸುಬ್ಬರಾಜ್ ಸೇವೆ ಸಲ್ಲಿಸುತ್ತಿದ್ದಾರೆ. ಅವರಿಗೆ ವಂದನೆಗಳು.

**ಹಸ್ತಪ್ರತಿ ಶಾಸ್ತ್ರ ಮತ್ತು ಹಳಗನ್ನಡ ತರಗತಿ**

ಕಳೆದ 24 ವರ್ಷಗಳಿಂದ ಹಸ್ತಪ್ರತಿಶಾಸ್ತ್ರ ತರಗತಿಗಳನ್ನು ನಡೆಸಲಾಗುತ್ತಿದೆ. ಜೊತೆಗೆ 3 ವಾರ್ಷಿಕ ಸಮ್ಮೇಳನಗಳನ್ನು ಆಯೋಜಿಸಿದೆ. ಕಳೆದ ವರ್ಷ ತುಮಕೂರು ವಿಶ್ವವಿದ್ಯಾಲಯದಲ್ಲಿ ಸಮ್ಮೇಳನ ಆಯೋಜಿಸಲಾಗಿತ್ತು.

ಕಾರ್ಯಕಾರಿ ಸಮಿತಿ ಅಪ್ಪಣೆ ಮೇರೆಗೆ

21–09–2014

ಪ್ರೊ. ಜಿ. ಅಬ್ದುಲ್ ಬಷೀರ್
ಶ್ರೀ ಬಿ.ಆರ್. ರವೀಂದ್ರನಾಥ್
ಗೌ॥ ಕಾರ್ಯದರ್ಶಿಗಳು